## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 91 ಎಲ್‌ಎಜಿ 2011, ಬೆಂಗಳೂರು, ದಿನಾಂಕ: 16ನೇ ನವೆಂಬರ್, 2011**

ಶ್ರೀ ಕೇಶವ ಗಣಪತಿ ಹೆಗಡೆ ಸಿಂಗಮನೆ, ವಕೀಲರು, ಶಿರಸಿ, ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977ರನ್ವಯ ದಿನಾಂಕ : 05–07–2011 ರಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಹಿರಿಯ ಶ್ರೇಣಿ ನ್ಯಾಯಾಲಯದ ಅಪರ ಸರ್ಕಾರಿ ವಕೀಲರ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಎ. ಗೌರೀಶ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 1604**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲಾ 156 ಎಲ್‌ಎಜಿ 2011, ಬೆಂಗಳೂರು, ದಿನಾಂಕ: 16ನೇ ನವೆಂಬರ್, 2011**

ಶ್ರೀ ಮಲ್ಲಿಕಾರ್ಜುನ ತಂದೆ ವೀರಣ್ಣ ಕರಿಗೌಡ, ಅಪರ ಸರ್ಕಾರಿ ವಕೀಲರು, ಯಾದಗಿರಿ ಜಿಲ್ಲೆ, ಇವರನ್ನು ಯಾದಗಿರಿ ಜಿಲ್ಲೆಯ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚುವರಿಯಾಗಿ ಕಾರ್ಯ ನಿರ್ವಹಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಎ. ಗೌರೀಶ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 1605**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 59 ಎಟಿಎಸ್ 2011, ಬೆಂಗಳೂರು, ದಿನಾಂಕ : 05ನೇ ಡಿಸೆಂಬರ್, 2011**

ಶ್ರೀ ಕೆ. ಸುಬ್ರಮಣ್ಯ, ತಹಶೀಲ್ದಾರ್, ಕೊಪ್ಪ ತಾಲ್ಲೂಕು ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಖಾಲಿ ಇರುವ ಸಹಾಯಕ ಕಾರ್ಯದರ್ಶಿ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಲು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1607**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 67 ಎಟಿಎಸ್ 2011 (ಭಾಗ–2), ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಡಾ॥ ಶಂಕರಪ್ಪ ಎಲ್. ವಣಿಕ್ಯಾಳ, ತಹಶೀಲ್ದಾರ್, ಚಿತ್ತಾಪುರ ಇವರನ್ನು ಸಂಖ್ಯೆ: ಕಂಇ 67 ಎಟಿಎಸ್ 2011 (ಭಾ) ದಿನಾಂಕ : 02–12–2011ರ ಅಧಿಸೂಚನೆಯಲ್ಲಿ ತಹಶೀಲ್ದಾರ್, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ವರ್ಗಾಯಿಸಲಾಗಿರುವುದನ್ನು ಭಾಗಶಃ ಮಾರ್ಪಡಿಸಿ, ಸಿಂಧಗಿ ತಾಲ್ಲೂಕಿನಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1608**

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಎನ್ 250 ಇಇಬಿ 2011, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 571 ಎಸ್ಎಎಸ್ 2011 ದಿನಾಂಕ 09–11–2011ರಲ್ಲಿ ಡಾ|| ಜಿ. ಸಿ. ಪ್ರಕಾಶ್, ಭಾ.ಆ.ಸೇ., ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಶ್ರೀ ಮುನೀಷ್ ಮುದ್ಗಿಲ್, ಭಾ.ಆ.ಸೇ. ಇವರ ಸ್ಥಾನದಲ್ಲಿ ನೇಮಕ ಮಾಡಲು ಇವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಿದೆ.

ಆದ್ದರಿಂದ ಡಾ|| ಜಿ. ಸಿ. ಪ್ರಕಾಶ್, ಭಾ.ಆ.ಸೇ. ಇವರನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರು ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1609**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 444 ಸಅಸೇ 2011(ಭಾಗ–2), ಬೆಂಗಳೂರು, ದಿನಾಂಕ : 09ನೇ ಡಿಸೆಂಬರ್, 2011**

ಶ್ರೀ ಸಿ. ಅರ್. ಅಮರನಾಥ್, ಸಹಾಯಕ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತ, ಚಾಮರಾಜಪೇಟೆ, ಬೆಂಗಳೂರು ಇವರನ್ನು ಒಪ್ಪಂದದ ಆಧಾರದ ಮೇಲೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಯಾಗಿ ದಿನಾಂಕ : 22–08–2011 ರಿಂದ ಜಾರಿಗೆ ಬರುವಂತೆ ಹಾಗೂ ಮಾನ್ಯ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಇವರ ಒಪ್ಪಂದದ ಆಧಾರದ ಸೇವೆಗೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 1612**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 401 ಸಅಸೇ 2011, ಬೆಂಗಳೂರು, ದಿನಾಂಕ : 09ನೇ ಡಿಸೆಂಬರ್, 2011**

ಶ್ರೀ ಬಿ. ಟಿ. ಚಾಮರಾಜನ್, ಕೆ.ಸಿ.ಎಸ್. ನಿವೃತ್ತ ಸಹಕಾರ ಸಂಘಗಳ ಅಪರ ನಿಬಂಧಕರು, ಸಹಕಾರ ಇಲಾಖೆ ಇವರನ್ನು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಗುತ್ತಿಗೆ ಆಧಾರದ ಮೇಲೆ ದಿನಾಂಕ: 18–08–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಶ್ರೀ ಬಿ. ಟಿ. ಚಾಮರಾಜನ್, ಇವರ ಗುತ್ತಿಗೆ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತುಗಳ ಕುರಿತು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 1613**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ: ಆಕುಕ 339 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 30ನೇ ಆಗಸ್ಟ್, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 339 ಹೆಚ್‌ಎಸ್‌ಹೆಚ್ 2011 ದಿನಾಂಕ: 29/08/2011ರ 3ನೇ ಸಾಲಿನಲ್ಲಿ ಡಾ॥ ವಿ. ಡಿ. ಪಾಲೇಕರ್ ಎಂಬ ಪದದ ಪಕ್ಕದಲ್ಲಿ "ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ ಬೆಂಗಳೂರು ಹಾಗೂ" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಪಿ.ಆರ್. 1610**

## ಆರ್ಥಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಇ 245 ರಾಲೆಪ 2011, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಸ್ಥಳ ನಿಯುಕ್ತಿಗಾಗಿ ಕಾಯುತ್ತಿರುವ ಶ್ರೀ ಡಿ. ಸಿ. ಶಿವಣ್ಣಗೌಡ, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಿಲ್ಲಾ ಪಂಚಾಯತ್, ಹಾಸನ ಇಲ್ಲಿ ಖಾಲಿ ಇರುವ ಮುಖ್ಯ ಲೆಕ್ಕಾಧಿಕಾರಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**ಪಿ.ಆರ್. 1614**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 11 ಆಸೇವ 2011, ಬೆಂಗಳೂರು, ದಿನಾಂಕ : 12ನೇ ಡಿಸೆಂಬರ್, 2011**

ಶ್ರೀ ಎನ್. ಹೆಚ್. ಸೂಳೇಬಾವಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಜಿಲ್ಲಾಧಿಕಾರಿ, ಹಿಪ್ಪರಗಿ ಯೋಜನೆ, ಅಥಣಿ, ಬೆಳಗಾಂ ಜಿಲ್ಲೆ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಯೋಜನಾ ನಿರ್ದೇಶಕರು, ಡಿ.ಯು.ಡಿ.ಸಿ., ರಾಯಚೂರು – ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1615**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ : 09ನೇ ಡಿಸೆಂಬರ್, 2011**

ಶ್ರೀ ಬಿ. ವಿಜಯಕುಮಾರ, ಅಧ್ಯಕ್ಷರು, ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ, ಬೆಂಗಳೂರು, ಇವರಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಹೆಚ್. ಚಂದ್ರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಪಿ.ಆರ್. 1616**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 223 ಐಡಿಎಂ 2010, ಬೆಂಗಳೂರು, ದಿನಾಂಕ : 09ನೇ ಡಿಸೆಂಬರ್, 2011**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂ:ಜಿಓಬಿ (1) 1/2011, ದಿನಾಂಕ : 15–11–2011ರಲ್ಲಿ ಶ್ರೀ ಎಸ್. ಎನ್. ಗದ್ದಿ, ಅಧ್ಯಕ್ಷಾಧಿಕಾರಿಗಳು, ಕರ್ನಾಟಕ ವಕ್ಫ್ ನ್ಯಾಯಮಂಡಳಿ, ಗುಲ್ಬರ್ಗಾ, ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆಗೆ ಅಧ್ಯಕ್ಷಾಧಿಕಾರಿಗಳು, ಕಾರ್ಮಿಕ ನ್ಯಾಯಾಲಯ, ಗುಲ್ಬರ್ಗಾ, ಇವರನ್ನು ದಿನಾಂಕ : 01–12–2011 ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸಮವರ್ತಿ ಪ್ರಭಾರದಲ್ಲಿಡುವಂತೆ ಕೋರಿರುತ್ತಾರೆ.

ಅದರಂತೆ, ಅಧ್ಯಕ್ಷಾಧಿಕಾರಿ, ಕಾರ್ಮಿಕ ನ್ಯಾಯಾಲಯ, ಗುಲ್ಬರ್ಗಾ ಇವರನ್ನು ದಿನಾಂಕ : 01–12–2011 ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅಧ್ಯಕ್ಷಾಧಿಕಾರಿ, ಕರ್ನಾಟಕ ವಕ್ಫ್ ನ್ಯಾಯ ಮಂಡಳಿ, ಗುಲ್ಬರ್ಗಾ, ಈ ಹುದ್ದೆಯಲ್ಲಿ ಸಮವರ್ತಿ ಪ್ರಭಾರದಲ್ಲಿಡಲಾಗಿವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ,**
ಪೀಠಾಧಿಕಾರಿ–5
ಕಾರ್ಮಿಕ ಇಲಾಖೆ (ಕಾರಾವಿಯೋ(ವೈ)ಸೇವೆಗಳು)

**ಪಿ.ಆರ್. 1617**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 328 ಪೊಸಿಪ 2011, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಶ್ರೀ ಶಿವಮೂರ್ತಿ, ಡಿವೈ.ಎಸ್.ಪಿ. (ಸಿವಿಲ್)ರವರ ಸ್ಥಳ ನಿರೀಕ್ಷಣಾ ಅವಧಿಯನ್ನು ಈ ಕೆಳಕಂಡಂತೆ ಇತ್ಯರ್ಥಗೊಳಿಸಲಾಗಿದೆ.

(1) ದಿನಾಂಕ : 02–04–2011 ರಿಂದ 31–05–2011ರವರೆಗೆ – 60 ದಿವಸಗಳು ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 18(5)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ.

(2) ದಿನಾಂಕ : 01–06–2011 ರಂದು – 01 ದಿವಸ ಅರ್ಹ ರಜೆ (ವೈದ್ಯಕೀಯ ಕಾರಣದ ಮೇರೆಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು ಅವರ ಹಕ್ಕಿನಲ್ಲಿರುವ ರಜೆ).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಪಿ.ಆರ್. 1618**

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 205 SPS 2011, Bangalore, Dated 09th December, 2011**

Shri. N. Shivakumar, IPS (KN-91), Inspector General of Police, who is under orders of transfer as Inspector General of Police, Karnataka State Human Rights Commission, Bangalore is modified and posted until further orders as Inspector General of Police & Additional Director, Fire Services, Bangalore vice Shri. Pratap Reddy C.H. IPS transferred.

Shri. Pratap Reddy C. H. IPS (KN-91), Inspector General of Police & Additional Director, Fire Services, Bangalore is transferred with immediate effect and posted until further orders as Inspector General of Police, Western Range, Mangalore vice Shri. Alok Mohan, IPS transferred.

The order issued in Government Notification No. DPAR 205 SPS 2011, dated : 02-11-2011 regarding transfer & posting of Shri. N. Shivakumar, IPS (KN-91), Inspector General of Police, as Inspector General of Police, Karnataka State Human Rights Commission, Bangalore, stands cancelled.

By Order and in the name of the Governor of Karnataka,

**N. Srinivasa Murthy,**
Under Secretary to Government,
DP & AR (Services-I).

**P.R. 1619**

## PERSONNEL AND ADMINISTRATIVE REFORMS SECRETARIAT

**NOTIFICATION**

**No. DPAR 262 SPS 2011(P), Bangalore, Dated 08th December, 2011**

The order issued in Government Notification No. DPAR 202 SPS 2010, dated: 02-09-2011 regarding transfer and posting of Shri. Sunil Agarwal, IPS (KN-91, Inspector General of Police and Commissioner of Police, Mysore City, Mysore as Inspector General of Police, Head Quarter-I, Bangalore, stands cancelled.

By Order and in the name of the Governor of Karnataka,

**N. Srinivasa Murthy,**
Under Secretary to Government,
DP & AR (Services-I).

**P.R. 1620**

## ಒಳಾಡಳಿತ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಒಇ 126 ಕಗೃಸೇ 2011, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಕರ್ನಾಟಕ ಗೃಹರಕ್ಷಕ ಅಧಿನಿಯಮ 1962ರ (ತಿದ್ದುಪಡಿ ನಿಯಮಗಳು 2003) ನಿಯಮ 3ಬಿ ರ ಉಪ ಕಲಂ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಎಂ. ಎ. ಷಕೀಬ್, ತಂದೆ ಎಂ. ಎ.ಅಜೀಜ್, ಲ್ಯಾಂಡ್ ಸ್ಕೇಪಿಂಗ್, ಸಾ: ಮನೆ ನಂ. 45/ಎಫ್, ಆಶಿಯಾನ ಹಳೇ ಮಾರ್ಕೆಟ್ ರಸ್ತೆ, ಕಂಟೋನ್ ಮೆಂಟ್, ಬಳ್ಳಾರಿ. ಇವರನ್ನು ಬಳ್ಳಾರಿ ಜಿಲ್ಲೆಯ ಗೃಹರಕ್ಷಕ ದಳದ ಗೌರವಸಮಾದೇಷ್ಟರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಜಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ಪಿ.ಆರ್. 1621**

## ಶಿಕ್ಷಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಇಡಿ 214 ಡಿಸಿಇ 2011, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಡಾ: ವಿ. ಕಮಲಮ್ಮ, ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರನ್ನು ಅವರದೇ ಸ್ವಂತ ವೇತನ ಹಾಗೂ ದರ್ಜೆಯ ಮೇಲೆ ಕೂಡಲೇ ಜಾರಿಗೆ ಬರುವಂತೆ ಖಾಲಿ ಇರುವ ಕಾಲೇಜು ಶಿಕ್ಷಣ ನಿರ್ದೇಶಕರ ಹುದ್ದೆಯಲ್ಲಿ ನೇಮಕ ಮಾಡಲಾಗಿದೆ.

ಪ್ರೊ. ಟಿ. ಹೆಚ್. ಈರಣ್ಣ, ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಆಯುಕ್ತಾಲಯ ಇವರನ್ನು ಕೂಡಲೇ ಜಾರಿಗೆ ಬರುವಂತೆ ಅವರದೇ ಸ್ವಂತ ವೇತನ ಹಾಗೂ ದರ್ಜೆಯಲ್ಲಿ ಡಾ: ವಿ. ಕಮಲಮ್ಮ ಇವರ ಪದೋನ್ನತಿಯಿಂದ ತೆರವಾದ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರ ಹುದ್ದೆಯಲ್ಲಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಬಿ. ಉಳವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ಪಿ.ಆರ್. 1622**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 54 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ : 07ನೇ ಡಿಸೆಂಬರ್, 2011**

ಶ್ರೀ ವಿ. ಅನ್ಬುಕುಮಾರ್, ಐ.ಎ.ಎಸ್. ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ, ರಾಯಚೂರು, ಇವರಿಗೆ ದಿನಾಂಕ : 03–12–2011 ರಿಂದ 12–12–2011ರವರೆಗೆ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಶ್ರೀ ವಿ. ಅನ್ಬುಕುಮಾರ್, ಐ.ಎ.ಎಸ್. ರವರ ರಜಾ ಅವಧಿಯಲ್ಲಿ ಅಪರ ಜಿಲ್ಲಾಧಿಕಾರಿ ರಾಯಚೂರು ಜಿಲ್ಲೆ, ರಾಯಚೂರು, ಇವರನ್ನು ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ, ರಾಯಚೂರು, ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀ ವಿ. ಅನ್ಬುಕುಮಾರ್, ಐ.ಎ.ಎಸ್. ರವರು ರಜೆಯ ಮೇಲೆ ಹೋಗಿರದಿದ್ದರೆ, ಜಿಲ್ಲಾಧಿಕಾರಿ ರಾಯಚೂರು ಜಿಲ್ಲೆ, ರಾಯಚೂರು, ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಪಿ.ಆರ್. 1623**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 41 ಹೆಚ್‌ಎಂಬಿ 2011, ಬೆಂಗಳೂರು, ದಿನಾಂಕ : 05ನೇ ಡಿಸೆಂಬರ್, 2011**

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)ಯ ಅಧಿಸೂಚನೆ ಸಂಖ್ಯೆ : ಆಇ 293 ವಾತೆಸಿ 2011, ದಿನಾಂಕ: 18–11–2011ರಲ್ಲಿ ಡಾ: ರಾಜೇಂದ್ರ ಸಿಂಗ್, ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಲೆಕ್ಕಪರಿಶೋಧನೆ)–5.5, ಡಿ.ವಿ.ಓ–5, ಬೆಂಗಳೂರು, ಇವರ ಸೇವೆಯನ್ನು ನವದೆಹಲಿಯ ಕರ್ನಾಟಕ ಭವನದಲ್ಲಿನ ಖಾಲಿ ಇರುವ ಉಪನಿವಾಸಿ ಆಯುಕ್ತರ ಹುದ್ದೆಗೆ ನೇಮಿಸುವ ಸಲುವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಿರುತ್ತದೆ.

ಡಾ: ರಾಜೇಂದ್ರ ಸಿಂಗ್, ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಲೆಕ್ಕಪರಿಶೋಧನೆ)–5.5, ಡಿ.ವಿ.ಓ–5, ಬೆಂಗಳೂರು, ಇವರನ್ನು ನವದೆಹಲಿಯಲ್ಲಿರುವ ಕರ್ನಾಟಕ ಭವನದ ಉಪನಿವಾಸಿ ಆಯುಕ್ತರ ಹುದ್ದೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗು ಮುಂದಿನ ಆದೇಶದವರೆಗೆ ಮರು ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಪಿ.ಆರ್. 1624**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 211 ಆಸೇವ 2011, ಬೆಂಗಳೂರು, ದಿನಾಂಕ : 05ನೇ ಡಿಸೆಂಬರ್, 2011**

ಶ್ರೀ ಡಿ. ಪಿ. ವೆಂಕಟೇಶ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಹೇಮಾವತಿ ನೀರಾವರಿ ಯೋಜನೆ, ನಾಗಮಂಗಲ, ಮಂಡ್ಯ ಜಿಲ್ಲೆ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು – ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1625**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 203 ಆಸೇವ 2011, ಬೆಂಗಳೂರು, ದಿನಾಂಕ : 26ನೇ ನವೆಂಬರ್, 2011**

ಡಾ: ಎಂ ಮಹೇಶ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರನ್ನು ಅವರ ಪ್ರಸ್ತುತ ಹುದ್ದೆಯ ಕರ್ತವ್ಯದ ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ತಿನ 2012ನೇ ಸಾಲಿನ ಕಾರ್ಯಕಾರಿ ಸಮಿತಿ ಚುನಾವಣೆಗೆ ಚುನಾವಣಾಧಿಕಾರಿಯಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಚುನಾವಣೆ ಪ್ರಕ್ರಿಯೆ ಮುಗಿಯುವವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1628**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 50 ಮುನೋಸೇ (1) 2011, ಬೆಂಗಳೂರು, ದಿನಾಂಕ : 02ನೇ ಡಿಸೆಂಬರ್, 2011**

ನೋಂದಣಿ ಮತ್ತು ಮುದ್ರಾಂಕ ಇಲಾಖೆ ಸೇವೆಗೆ ಸೇರಿದ ಶ್ರೀ ಸಿ. ಜೆ. ಪ್ರಭಾಕರ್, ಹಿರಿಯ ಉಪ ನೋಂದಣಾಧಿಕಾರಿ, ಪ್ರಸ್ತುತ ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಬ್ಯಾಟರಾಯನಪುರ ಬೆಂಗಳೂರು ಇಲ್ಲಿ ಖಾಲಿ ಇರುವ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಪಿ.ಆರ್. 1629**

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 39 ಭಾನಿವಿ 2011, ಬೆಂಗಳೂರು, ದಿನಾಂಕ : 12ನೇ ಡಿಸೆಂಬರ್, 2011**

ಶ್ರೀ ದೇವರಾಜು, ಉಪ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಇವರು ಉಪ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ : 13–12–2010 ರಿಂದ 12–12–2011ರ ವರೆಗಿನ ಸ್ಥಾನಾಪನ್ನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19 (3) (ಸಿ) ಪ್ರಕಾರ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಶ್ರೀಧರ್,**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಪಿ.ಆರ್. 1630**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 194 ಆಸೇವ 2011, ಬೆಂಗಳೂರು, ದಿನಾಂಕ : 22ನೇ ನವೆಂಬರ್, 2011**

ಶ್ರೀ ಬಿ. ಹೆಚ್. ಸಿದ್ದಪ್ಪ, ಕೆ.ಎ.ಎಸ್., (ಕಿರಿಯ ಶ್ರೇಣಿ) ಅಧಿಕಾರಿ, ಉಪವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ಇವರನ್ನು ಅಧಿಸೂಚನೆ ಸಂಖ್ಯೆ : ಸಿಆಸುಇ 174 ಆಸೇವ 2011 ದಿನಾಂಕ : 31–10–2011ರಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಹುದ್ದೆಗೆ ವರ್ಗಾಯಿಸಿರುವುದನ್ನು ಮಾರ್ಪಡಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಮೆಟ್ರೋರೈಲು ನಿಗಮ ನಿಯಮಿತ, ಬೆಂಗಳೂರು – ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1632**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 414 ಎಎಸ್‌ಡಿ 2011, ಬೆಂಗಳೂರು, ದಿನಾಂಕ : 30ನೇ ನವೆಂಬರ್, 2011**

ಡಾ: ವಿ. ವೆಂಕಟೇಶ್ ಮೂರ್ತಿ, ತಹಶೀಲ್ದಾರ್, ಹರಪ್ಪನಹಳ್ಳಿ ಇವರು ದಿನಾಂಕ : 17–05–2011 ರಿಂದ 31–07–2011 ರವರೆಗೆ ಕಂದಾಯ ಇಲಾಖೆಯಲ್ಲಿ ಸ್ಥಳ ನಿಯುಕ್ತಿಗಾಗಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1633**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 25 ಪಿಡಬ್ಲ್ಯೂಸಿ 2011, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್, 2011**

ಶ್ರೀ ಕೆ. ಬಿ. ದೇವರಾಜ, ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರನ್ನು ಕರ್ನಾಟಕ ರಾಜ್ಯ ನಿರ್ಮಾಣ ನಿಗಮದ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 8 (ಸಿ)ರಲ್ಲಿ ಪ್ರದತ್ತವಾದ ಅಧಿಕಾರದಂತೆ ದಿನಾಂಕ : 30–08–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ನಿರ್ಮಾಣ ನಿಗಮ ನಿಯಮಿತ ಮಂಡಳಿಯ ನಿರ್ದೇಶಕರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎಸ್. ವಿರಕ್ತಮಠ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
(ಸೇವೆಗಳು–ಸಿ)

**ಪಿ.ಆರ್. 1634**

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 95 ಡಿಪಿಐ 2011, ಬೆಂಗಳೂರು, ದಿನಾಂಕ : 08ನೇ ಡಿಸೆಂಬರ್, 2011**

ಸಾರ್ವಜನಿಕ ಶಿಕ್ಷಣ ಇಲಾಖೆಯ, ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಗ್ರೂಪ್–'ಎ' ಕಿರಿಯ ವೇತನ ಶ್ರೇಣಿಯ ಈ ಕೆಳಕಂಡ ಅಧಿಕಾರಿಗಳಿಗೆ ರೂ. 18,150–26,925ರ ಗ್ರೂಪ್–'ಎ' ಹಿರಿಯ ವೇತನ ಶ್ರೇಣಿಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಹುದ್ದೆಗೆ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಾನಪನ್ನ ಬಡ್ತಿ ನೀಡಿ, ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆ ಮತ್ತು ಸ್ಥಳಗಳಿಗೆ ನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿ ಮೂಲಕ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 1. | ಶ್ರೀ ಎಸ್. ಜೆ. ಕೆರುಟಗಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಇಲಕಲ್, ಬಾಗಲಕೋಟೆ ಜಿಲ್ಲೆ. | ಪ್ರಾಂಶು ಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ. (ಶ್ರೀ ಎನ್. ಎಸ್. ಕುಮಾರ್, ಇವರ ವರ್ಗಾವಣೆಯಿಂದ ತೆರವಾದ ಹುದ್ದೆ) |
| 2. | ಶ್ರೀ ಬಿ. ಆರ್. ಕುಮಾರಸ್ವಾಮಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಚಿಕ್ಕಮಗಳೂರು. | ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ. (ಶ್ರೀಮತಿ ಪಿ. ಪದ್ಮಮ್ಮ, ಇವರ ವರ್ಗಾವಣೆಯಿಂದ ತೆರವಾದ ಹುದ್ದೆ) |
| 3. | ಶ್ರೀ ಜೆ. ಜೆ. ದೊಡ್ಡಮನಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಿಜಾಪುರ | ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಜಮಖಂಡಿ, ಬಾಗಲಕೋಟೆ ಜಿಲ್ಲೆ (ಖಾಲಿ ಹುದ್ದೆ) |
| 4. | ಶ್ರೀ ವಿ. ಎಲ್. ಗರಗ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಗದಗ. | ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬಳ್ಳಾರಿ. (ಖಾಲಿ ಹುದ್ದೆ) |
| 5. | ಶ್ರೀ ಎಸ್. ಆರ್. ಶಿಂಫೆ, ಉಪನ್ಯಾಸಕರು, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಬೆಳಗಾವಿ. | ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಬೆಳಗಾವಿ (ಶ್ರೀ ಎಸ್. ವಿ. ಪದ್ಮನಾಭ ಇವರ ವರ್ಗಾವಣೆಯಿಂದ ತೆರವಾದ ಹುದ್ದೆ) |

| | | |
|---|---|---|
| 6. | ಶ್ರೀ ಡಿ. ಎಸ್. ರಾವುತ್,<br>ಉಪನ್ಯಾಸಕರು,<br>ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಜಮಖಂಡಿ, ಬಾಗಲಕೋಟೆ ಜಿಲ್ಲೆ, | ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಜಮಖಂಡಿ, ಬಾಗಲಕೋಟೆ ಜಿಲ್ಲೆ,<br>(ಶ್ರೀಮತಿ ಜೊಹರಾ ಜಬೀನ್, ಇವರ ವರ್ಗಾವಣೆಯಿಂದ ತೆರವಾದ ಹುದ್ದೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ)

**ಪಿ.ಆರ್. 1635**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಂಇ 67 ಎಟಿಎಸ್ 2011(ಭಾ), ಬೆಂಗಳೂರು, ದಿನಾಂಕ : 02ನೇ ಡಿಸೆಂಬರ್, 2011**

ಕಂದಾಯ ಇಲಾಖೆಯಲ್ಲಿ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಸ್ಥಳಕ್ಕೆ ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿ ಆದೇಶಿಸಿದೆ.

| ಕ್ರ. ಸಂ. | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| 1. | ಡಾ: ಶಂಕರಪ್ಪ ಎಲ್. ವಣಿಕ್ಯಾಳ,<br>ತಹಶೀಲ್ದಾರ್, ಚಿತ್ತಾಪುರ | ತಹಶೀಲ್ದಾರ್, ಭಾಲ್ಕಿ ತಾಲ್ಲೂಕು,<br>ಬೀದರ್ ಜಿಲ್ಲೆ (ಖಾಲಿ ಹುದ್ದೆಗೆ) |
| 2. | ಶ್ರೀ ಮಧುಸೂಧನ ಶಾಸ್ತ್ರಿ,<br>ಚುನಾವಣಾ ತಹಶೀಲ್ದಾರ್, ಗುಲ್ಬರ್ಗಾ | ತಹಶೀಲ್ದಾರ್, ಹುಮನಾಬಾದ್ ತಾಲ್ಲೂಕು,<br>ಬೀದರ್ ಜಿಲ್ಲೆ (ಖಾಲಿ ಹುದ್ದೆಗೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1636**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 72 ಎಟಿಎಸ್ 2011, ಬೆಂಗಳೂರು, ದಿನಾಂಕ : 09ನೇ ಡಿಸೆಂಬರ್, 2011**

ಶ್ರೀ ಮುನಿವೀರಪ್ಪ, ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಕೋಲಾರ ತಾಲ್ಲೂಕಿನ ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ದಯಾನಂದ್ ಇವರ ಸ್ಥಳಕ್ಕೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ರಮೇಶ್,**
ಸರ್ಕಾರದ ಜಂಟಿ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂ, ಸೇವೆಗಳು ಮತ್ತು ಭೂ.ಕಂ.)

**ಪಿ.ಆರ್. 1637**

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 151 SFP 2010, Bangalore, Dated 07th December, 2011

**Shri C. Munegowda, SFS,** Deputy Conservator of Forests, Zilla Panchayat, Hassan is transferred with immediate effect and posted until further orders as **Deputy Conservator of Forests, Kolar Territorial Division, Kolar** vice Shri Anil Kumar Ratan (KN-96) transferred, by keeping the IFS cadre post in abeyance.

By Order and in the name of the Governor of Karnataka,

**N. Srinivasa Murthy,**

Under Secretary to Government,

**P.R. 1641** DP & AR (Services-I).

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 580 SAS 2011, Bangalore, Dated 03rd December, 2011

***Sri G. S. Narayanaswamy, IAS (KN-90), Secretary to Government, Labour Department*** is placed in additional charge of the post of ***Principal Secretary to Government, Transport Department*** with immediate effect and until further orders.

By Order and in the name of the Governor of Karnataka,

**N. Srinivasa Murthy,**

Under Secretary to Government,

**P.R. 1642** DP & AR (Services-I).

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 580 SAS 2011, Bangalore, Dated 03rd December, 2011

The services of ***Sri Munish Moudgil, IAS (KN-98),*** are placed at the disposal of Water resources Department with immediate effect for being posted as ***Administrator, CADA, Bheemarayanagudi, Gulbarga District*** until further orders, in the existing vacancy.

The orders issued in Government Notification No. DPAR 571 SAS 2011, dated 09-11-2011 posting Sri Munish Moudgil, IAS as *Commissioner, Upper Krishna Project (UKP), Rehabilitation and Resettlement (R & R), Bagalk*ot **Stands cancelled**.

By Order and in the name of the Governor of Karnataka,

**N. Srinivasa Murthy,**

Under Secretary to Government,

**P.R. 1643** DP & AR (Services-I).

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 309 SPS 2011, Bangalore, Dated 07th December, 2011

Shri. Sandeep Patil, IPS (KN-2004), Superintendent of Police, Belgaum District, Belgaum is transferred with immediate effect and posted until further orders as Superintendent of Police, Mandya District, Mandya vice Shri. Kaushlendra Kumar, IPS transferred.

Shri. Kaushlendra Kumar, IPS (KN-2005), Superintendent of Police, Mandya District, Mandya is transferred with immediate effect and posted until further orders as Superintedent of Police, Belgaum District, Belgaum vice Shri. Sandeep Patil, IPS transferred.

By Order and in the name of the Governor of Karnataka,

**N. Srinivasa Murthy,**

Under Secretary to Government,

**P.R. 1644** DP & AR (Services-I).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಶಿಸನೇ 2010, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2011.**

ಶ್ರೀ. ಶಂಕರಪ್ಪ, ಅಧ್ಯಕ್ಷರು, ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು, ಇವರಿಗೆ ಸಚಿವ ಸಂಪುಟ ದರ್ಜೆಯ ಸ್ಥಾನಮಾನವನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಚ್. ಚಂದ್ರಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

**ಪಿ.ಆರ್. 1645**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 302 ಸಅಸೇ 2011, ಬೆಂಗಳೂರು, ದಿನಾಂಕ: 17ನೇ ನವೆಂಬರ್, 2011.**

ಶ್ರೀ. ಎಂ.ಎಸ್. ದೇಸಾಯಿ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಗುತ್ತಿಗೆ ಆಧಾರದ ಮೇಲೆ ದಿನಾಂಕ: 8–8–2011ರಿಂದ ಜಾರಿಗೆ ಬರುವಂತೆ **ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಆಪ್ತ ಶಾಖೆಯಲ್ಲಿ** ಒಂದು ಗ್ರೂಪ್–ಸಿ ಹುದ್ದೆಯನ್ನು ಉನ್ನತೀಕರಿಸಿ **ಸಚಿವರ ವಿಶೇಷ ಕರ್ತವ್ಯಾಧಿಕಾರಿ** ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಮಾನ್ಯ **ಬೃಹತ್ ಮತ್ತು ಮಧ್ಯಮ ಕೈಗಾರಿಕಾ** ಸಚಿವರ ಆಪ್ತ ಶಾಖೆಯಲ್ಲಿ ಒಂದು ಗ್ರೂಪ್–ಸಿ ಹುದ್ದೆಯನ್ನು ಭರ್ತಿ ಮಾಡದಂತೆ ಹಾಗೂ ಈ ಹುದ್ದೆಯಲ್ಲಿ ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದಲ್ಲಿ ಅವರ ಸೇವೆಯನ್ನು ಹಿಂದಿರುಗಿಸುವಂತೆ ಸಹ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು.ಇಲಾಖೆ (ಸೇವೆಗಳು–3).

**ಪಿ.ಆರ್. 1646**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 182 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ: 16ನೇ ನವೆಂಬರ್, 2011.**

ಶ್ರೀಮತಿ ದೀಪ್ತಿ ದಿಲೀಪ್ ಮೆಹಂದಳೆ, ಐ.ಎ.ಎಸ್., ಉಪವಿಭಾಗಾಧಿಕಾರಿ, ಮಧುಗಿರಿ ವಿಭಾಗ, ತುಮಕೂರು ಜಿಲ್ಲೆ, ತುಮಕೂರು, ಇವರಿಗೆ ದಿನಾಂಕ:07–10–2011 ರಿಂದ 13–11–2011ರವರೆಗೆ ಗಳಿಕೆ ರಜೆಯನ್ನು ವೈದ್ಯಕೀಯ ನೆಲೆಯಲ್ಲಿ ಘಟನೋತ್ತರವಾಗಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–1).

**ಪಿ.ಆರ್. 1647**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 88 ಎಬಿಸಿ 2011, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2011.**

93–ಬಳ್ಳಾರಿ ವಿಧಾನ ಸಭಾ ಕ್ಷೇತ್ರಕ್ಕೆ ನಡೆಯುತ್ತಿರುವ ಮರುಚುನಾವಣೆಯ ಹಿನ್ನೆಲೆಯಲ್ಲಿ ಈ ಕೆಳಕಂಡ ವರ್ಗಾವಣೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಾರ್ವಜನಿಕ ಹಿತದೃಷ್ಟಿಯಿಂದ ಆದೇಶಿಸಿದೆ.

1) ಶ್ರೀ ಎಲ್. ರಾಘವರೆಡ್ಡಿ ಸಹಾಯಕ ಕಾರ್ಯಪಾಲಕ ಅಭಿಯಂತರರು, ಬಳ್ಳಾರಿ ಮಹಾನಗರಪಾಲಿಕೆ, ಇವರ ಸೇವೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಬಳ್ಳಾರಿ ಮಹಾನಗರಪಾಲಿಕೆಯಿಂದ ಹಿಂಪಡೆದು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆಗೆ ಹಿಂತಿರುಗಿಸಿ ಆದೇಶಿಸಿದೆ.

2) ಶ್ರೀ ಟಿ.ಜಿ. ವೆಂಕಟಯ್ಯ, ಕರ ವಸೂಲಿಗಾರರು, ಬಳ್ಳಾರಿ ಮಹಾನಗರಪಾಲಿಕೆ, ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಾರ್ವಜನಿಕ ಹಿತದೃಷ್ಟಿಯಿಂದ ಬಳ್ಳಾರಿ ಮಹಾನಗರಪಾಲಿಕೆಯಿಂದ ಹಿಂದಕ್ಕೆ ಪಡೆಯಲಾಗಿದೆ. ಸದರಿ ನೌಕರರು ಮುಂದಿನ ಸ್ಥಳ ನಿಯುಕ್ತಿಗಾಗಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ರವರಲ್ಲಿ ಕಾರ್ಯವರದಿ ಮಾಡಿಕೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಮಹೇಶ್‌ಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

(ಮಹಾನಗರಪಾಲಿಕೆ–2) ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1648**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 58 ಎಟಿಎಸ್ 2011, ಬೆಂಗಳೂರು, ದಿನಾಂಕ: 4ನೇ ನವೆಂಬರ್, 2011.**

ಕಂದಾಯ ಇಲಾಖೆಯಲ್ಲಿ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಭೂಮಿ ಮತ್ತು ಯುಪಿಓಆರ್ ಯೋಜನೆಗಾಗಿ ಸಂಖ್ಯೆ: ಕಂಇ 58 ಎಟಿಎಸ್ 2011 ದಿನಾಂಕ: 4–11–2011 ರ ಅಧಿಸೂಚನೆಯಲ್ಲಿ ವರ್ಗಾಯಿಸಲಾಗಿದ್ದು ಈ ಕೂಡಲೇ ಜಾರಿಗೆ ಬರುವಂತೆ ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿದೆ. ವರ್ಗಾಯಿಸಿ ನೇಮಿಸಿದ ಸ್ಥಳದಲ್ಲಿ ಕರ್ತವ್ಯದ ಮೇಲೆ ವರದಿ ಮಾಡಿಕೊಳ್ಳಲು ಆದೇಶಿಸಿದೆ.

| ಕ್ರ. ಸಂ | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| **1** | **2** | **3** |
| 1 | ಆರ್. ರಂಗಸ್ವಾಮಿ,<br>ತಹಶೀಲ್ದಾರ್, ಖಾದಿ ಬೋರ್ಡ್, ಮೈಸೂರು. | ತಹಶೀಲ್ದಾರ್,<br>ಭೂಮಿ ಮತ್ತು ಯುಪಿಓಆರ್ ಯೋಜನೆ,<br>ಮೈಸೂರು. |
| 2 | ಮಂಜುನಾಥ ಎ.ಎಲ್.,<br>ಚುನಾವಣಾ ತಹಶೀಲ್ದಾರ್,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು | ತಹಶೀಲ್ದಾರ್,<br>ಭೂಮಿ ಮತ್ತು ಯುಪಿಓಆರ್ ಯೋಜನೆ,<br>ಮೈಸೂರು. |
| 3 | ಸುರೇಶ ಜಿ.<br>ಮುನ್ಸಿಪಲ್ ತಹಶೀಲ್ದಾರ್,<br>ಜಿಲ್ಲಾಧಿಕಾರಿಗಳ ಕಛೇರಿ, ಚಿಕ್ಕಮಗಳೂರು. | ತಹಶೀಲ್ದಾರ್,<br>ಭೂಮಿ ಮತ್ತು ಯುಪಿಓಆರ್ ಯೋಜನೆ,<br>ಶಿವಮೊಗ್ಗ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಗೋಪಾಲಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1649**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 131 ಭೂಸ್ವಾಬೆ 2011, ಬೆಂಗಳೂರು, ದಿನಾಂಕ: 5ನೇ ನವೆಂಬರ್, 2011.**

ಸರ್ಕಾರದ ಆದೇಶ ಸಂಖ್ಯೆ: ಕಂಇ 138 ಭೂಸ್ವಾಬೆ 2011 ದಿನಾಂಕ: 1–10–2011 ರ ಆದೇಶದಲ್ಲಿ ಸೃಜಿಸಲಾಗಿರುವ ವಿಶೇಷ ಭೂಸ್ವಾಧೀನಾಧಿಕಾರಿಗಳು, ಎನ್.ಹೆಚ್.ಎ.ಐ, ಗುಲ್ಬರ್ಗಾ ಹುದ್ದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ ಕಂಇ 40 ಭೂಸ್ವಾಬೆ 2010

ದಿನಾಂಕ: 30–4–2010ರಲ್ಲಿ ಸೃಜಿಸಿರುವ ವಿಶೇಷ ಭೂಸ್ವಾಧೀನಾಧಿಕಾರಿ, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಹೊಸಪೇಟೆ, ಹುದ್ದೆ ಖಾಲಿ ಇರುವುದರಿಂದ ಸದರಿ ಹುದ್ದೆಗಳಿಗೆ ಕೆಳಕಂಡಂತೆ ಸಂಬಂಧಪಟ್ಟ ಉಪ ವಿಭಾಗಾಧಿಕಾರಿಗಳು/ ವಿಶೇಷ ಭೂಸ್ವಾಧೀನಾಧಿಕಾರಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದ ಮೇಲೆ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಖಾಲಿ ಇರುವ ಹುದ್ದೆಗಳ ವಿವರ | ಅಧಿಕ ಪ್ರಭಾರದ ಮೇಲೆ ನೇಮಕ ಮಾಡಿರುವ ಅಧಿಕಾರಿಗಳು |
|---|---|---|
| 1 | ವಿಶೇಷ ಭೂಸ್ವಾಧೀನಾಧಿಕಾರಿ, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಹೊಸಪೇಟೆ. | ವಿಶೇಷ ಭೂಸ್ವಾಧೀನಾಧಿಕಾರಿ, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಚಿತ್ರದುರ್ಗ. |
| 2 | ವಿಶೇಷ ಭೂಸ್ವಾಧೀನಾಧಿಕಾರಿ, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಗುಲ್ಬರ್ಗಾ. | ಉಪ ವಿಭಾಗಾಧಿಕಾರಿ, ಗುಲ್ಬರ್ಗಾ ಉಪ ವಿಭಾಗ, ಗುಲ್ಬರ್ಗಾ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟೇಶಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2).

**ಪಿ.ಆರ್. 1650**

## ಉನ್ನತ ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 306 ಯುಆರ್‌ಸಿ 2011, ಬೆಂಗಳೂರು, ದಿನಾಂಕ: 9ನೇ ನವೆಂಬರ್, 2011.**

ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ಅಧಿನಿಯಮ, 2009ರ ಪ್ರಕರಣ 15ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಡಾ. ಎಂ. ಬಸವಣ್ಣ, ಪ್ರಾಧ್ಯಾಪಕರು, ಭೂವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದ ಕುಲಸಚಿವರ ಹುದ್ದೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು).

**ಪಿ.ಆರ್. 1651**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 58 ಎಟಿಎಸ್ 2011, ಬೆಂಗಳೂರು, ದಿನಾಂಕ: 4ನೇ ನವೆಂಬರ್, 2011.**

ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳನ್ನು ಆಡಳಿತ ಹಿತದೃಷ್ಟಿಯಿಂದ ಭೂಮಿ ಮತ್ತು ಯು.ಪಿ.ಓ.ಆರ್ ಯೋಜನೆಗಾಗಿ ವರ್ಗಾಯಿಸಿ ನೇಮಿಸಿ ಹೊರಡಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 58 ಎಟಿಎಸ್ 2011 ದಿನಾಂಕ: 20–10–2011 ರಲ್ಲಿ ಕ್ರಮ ಸಂಖ್ಯೆ: (6) ರಲ್ಲಿನ ಶ್ರೀ ನರಸಿಂಹಪ್ಪ, ತಹಶೀಲ್ದಾರ್, ಭೂಸ್ವಾಧೀನ ಶಾಖೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಗೆ ಸಂಬಂಧಿಸಿದ ವರ್ಗಾವಣೆಯನ್ನು ಮಾತ್ರ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ರದ್ದುಪಡಿಸಿ ಸದರಿಯವರನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಭೂಸ್ವಾಧೀನ ಶಾಖೆಯ ತಹಶೀಲ್ದಾರ್ ಹುದ್ದೆಯಲ್ಲಿಯೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1652**

## ಯುವಜನ ಸೇವಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಯುಸೇಇ 137 ಯುಇಸೇ 11, ಬೆಂಗಳೂರು, ದಿನಾಂಕ: 24ನೇ ನವೆಂಬರ್, 2011.**

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಸಹಾಯಕ ನಿರ್ದೇಶಕರಾಗಿರುವ ಶ್ರೀ ಸತೀಶ ಸಜ್ಜನರ್ ಇವರು ಹೊಂದಿದ್ದ ಬೆಂಗಳೂರು ಜಿಲ್ಲೆ ಜಕ್ಕೂರಿನ ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಕಾರ್ಯದರ್ಶಿ ಹುದ್ದೆಯ ಸಮವರ್ತಿ ಪ್ರಭಾರದಿಂದ (concurrent charge) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶ್ರೀನಿವಾಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

**ಪಿ.ಆರ್. 1653**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಾಕೈ 280 ಕೈಸೇವಿ 2010, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2011.**

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ನಿಯಮ 32 ರಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಜಂಟಿ ನಿರ್ದೇಶಕರುಗಳಿಗೆ ವೇತನ ಶ್ರೇಣಿ 20025–28275 ರಲ್ಲಿ ಸ್ಥಾನಪನ್ನ ಬಡ್ತಿ ನೀಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮತ್ತು ಅವರುಗಳು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸಿ ನೇಮಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು ಮತ್ತು ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಸ್ಥಾನಪನ್ನ ಬಡ್ತಿ ನೀಡಿ ನೇಮಿಸಿದ ಸ್ಥಳ |
|---|---|---|
| 1 | ಶ್ರೀ ಎಂ.ಎಸ್.ಮುದಕವಿ<br>ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು | ಜಂಟಿ ನಿರ್ದೇಶಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು |
| 2 | ಶ್ರೀ ಆರ್.ರಘು<br>ವೈಜ್ಞಾನಿಕಾಧಿಕಾರಿಗಳು,<br>ಪರಿಸರ ಜೀವಶಾಸ್ತ್ರ ಹಾಗೂ ಪರಿಸರ ಇಲಾಖೆ, ಬೆಂಗಳೂರು | ವೈಜ್ಞಾನಿಕಾಧಿಕಾರಿಗಳು, ಪರಿಸರ ಜೀವಶಾಸ್ತ್ರ ಹಾಗೂ ಪರಿಸರ ಇಲಾಖೆ, ಬೆಂಗಳೂರು |
| 3 | ಶ್ರೀ ಕೆ.ಎಲ್. ಬಸವರಾಜ್,<br>ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಚಾಮರಾಜನಗರ. | ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಚಾಮರಾಜನಗರ. |
| 4 | ಶ್ರೀಮತಿ ಜಿ. ಯಮುನಾ<br>ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ, ಬೆಂಗಳೂರು. | ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ವಾಸನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ಪಿ.ಆರ್. 1656**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 85 ಯುಡಬ್ಲ್ಯೂಇ 2011, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2011.**

ಅಧಿಸೂಚನೆ ಸಂಖ್ಯೆ: ಸಿ.ಆ.ಸು.ಇ 571 .ಎಸ್ಎಎಸ್. 2011 ದಿನಾಂಕ 9–11–2011ರಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ **ಶ್ರೀ ಜಿ.ವಿ.ಕೊಂಗವಾಡ ಭಾ.ಆ.ಸೇ ರವರನ್ನು** ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಕಾರ್ಯದರ್ಶಿಗಳನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಿ ನೇಮಿಸಿದ್ದು ಸದರಿಯವರ ಸ್ಥಾನದಲ್ಲಿ **ಶ್ರೀ ರಾಜೇಂದ್ರಕುಮಾರ್ ಕಠಾರಿಯಾ ಭಾ.ಆ.ಸೇ.,** ಪ್ರಸ್ತುತ ನೇಮಕಾತಿ ಆದೇಶದ ನಿರೀಕ್ಷೆಯಲ್ಲಿರುವ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಗರ ನೀರು ಸರಬರಾಜು ಮತು ಒಳಚರಂಡಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಅದರಂತೆ, **ಶ್ರೀ ರಾಜೇಂದ್ರಕುಮಾರ್ ಕಠಾರಿಯಾ ಭಾ.ಅ.ಸೇ.**, ರವರನ್ನು ದಿನಾಂಕ: 10–11–2011ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ **ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ** ಮರು ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1657**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 36 ಆಸೇವ 2011, ಬೆಂಗಳೂರು, ದಿನಾಂಕ: 24ನೇ ನವೆಂಬರ್, 2011.**

ಅಧಿಸೂಚನೆ ಸಂಖ್ಯೆ: ಸಿಅಸುಇ 2 ಆಸೇಜೆ 2000, ದಿನಾಂಕ: 04–03–2006 ರಲ್ಲಿ ಪ್ರಕಟಿಸಿರುವ ಕೆಎಎಸ್ ಸಮೂಹ–ಎ (ಹಿರಿಯ ಶ್ರೇಣಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಆಧಾರದ ಮೇಲೆ ಶ್ರೀ ಬಿ.ಎಂ.ಹಲಗತ್ತಿ ನಿವೃತ್ತ ಕೆಎಎಸ್ ಹಿರಿಯ ಶ್ರೇಣಿ ಅಧಿಕಾರಿ ಇವರಿಗೆ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಶ್ರೀ ಎಲ್.ರಾಧಾಕೃಷ್ಣ ಇವರಿಗೆ ಕೆಎಎಸ್ ಆಯ್ಕೆ ಶ್ರೇಣಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ: 28–08–2008 ರಿಂದಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ) ನಿಯಮಾವಳಿಗಳು 1978ರ ನಿಯಮ 2(1)(ಎ)ರನ್ವಯ ಪೂರ್ವಾನ್ವಯವಾಗಿ ರೂ.24450–31800ರ ವೇತನ ಶ್ರೇಣಿಯಲ್ಲಿ ಕೆಎಎಸ್ (ಆಯ್ಕೆ ಶ್ರೇಣಿ) ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2).

**ಪಿ.ಆರ್. 1659**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 264 ಎಸ್ಎಂಇ 2010, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2011.**

ಶ್ರೀಮತಿ ಇಮ್‌ಕೊಂಗ್ಲ ಜಮೀರ್, ಐಎಎಸ್, ಅಪರ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರಿಗೆ ಖಾಸಗಿ ವಿದೇಶ ಪ್ರವಾಸ ಕೈಗೊಳ್ಳುವ ಸಲುವಾಗಿ ದಿನಾಂಕ: 17–12–2011 ರಿಂದ 14–01–2012 ರವರೆಗೆ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಈ ಮೇಲಿನ ರಜಾ ಅವಧಿಯಲ್ಲಿ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರನ್ನು ಅಪರ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಈ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಶ್ರೀಮತಿ ಇಮ್‌ಕೊಂಗ್ಲ ಜಮೀರ್, ಐಎಎಸ್, ಇವರು ರಜೆ ಮೇಲೆ ಹೋಗಿರದಿದ್ದರೆ ಅಪರ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಹುದ್ದೆಯಲ್ಲಿಯೇ ಸ್ಥಾನಪನ್ನರಾಗುತ್ತಿದ್ದರೆಂದು ದೃಢೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಶ್ರೀನಿವಾಸಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ (ಸೇವೆಗಳು–1).

**ಪಿ.ಆರ್. 1660**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 467 ಪಿಪಿಇ 2011, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2011.**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 24(4)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಗೌರಮ್ಮ ಎಲ್ ದೇಸಾಯಿ, ವಿಶೇಷ ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೊಪ್ಪಳ ಇವರನ್ನು ಇಲಾಖಾ ಅಧಿಕಾರಿಗಳಿಂದ ಭರ್ತಿ ಮಾಡುವವರೆಗೆ ಅಥವಾ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ದಿನಾಂಕ: 20–11–2011 ರಿಂದ ಮುಂದುವರೆಸಿ ತಾತ್ಕಾಲಿಕವಾಗಿ ನೇಮಕಾತಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು 'ಬಿ').

**ಪಿ.ಆರ್. 1661**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 267 ಪೊಸಿಪ 2010, ಬೆಂಗಳೂರು, ದಿನಾಂಕ: 21ನೇ ನವೆಂಬರ್, 2011.**

ಡಾ: ಟಿ.ಡಿ. ಪವಾರ್, ಐಪಿಎಸ್. ರವರು ಹಿಂದೆ ನಾನ್ ಐ.ಪಿ.ಎಸ್. ದರ್ಜೆಯಲ್ಲಿ ಸ್ಥಳ ನಿಯುಕ್ತಿಗಾಗಿ ದಿನಾಂಕ: 27–12–2009 ರಿಂದ 25–03–2010ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ಪಿ.ಆರ್. 1662**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 144 ಅಖಇ 2011, ಬೆಂಗಳೂರು, ದಿನಾಂಕ: 18ನೇ ನವೆಂಬರ್, 2011.**

ಶ್ರೀ ಗಂಗಾಧರ ಎಂ.ದೊಡ್ಡಮನಿ, ಸಹಾಯಕ ಲೆಕ್ಕಾಧಿಕಾರಿ, ತಾಲ್ಲೂಕು ಪಂಚಾಯತ್, ಗದಗ, ಇವರನ್ನು ಜಿಲ್ಲಾಧಿಕಾರಿ, (ಅಲ್ಪಸಂಖ್ಯಾತರು) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬಿಜಾಪುರ–ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

**ಪಿ.ಆರ್. 1663**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 124 ಎಸ್ಐಎಸ್ 2011, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2011.**

ಶ್ರೀಮತಿ ಶಮೀಮ್ ಬಾನು, ಐ.ಎ.ಎಸ್, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ, ಬೆಂಗಳೂರು ಇವರಿಗೆ ದಿನಾಂಕ: 22–11–2011 ರಿಂದ 03–12–2011 ರವರೆಗೆ (ಉದಿಸೇ) ಪರಿವರ್ತಿತ ರಜೆಯನ್ನು ವೈದ್ಯಕೀಯ ನೆಲೆಯಲ್ಲಿ ಮಂಜೂರು ಮಾಡಲಾಗಿದೆ.

ಶ್ರೀಮತಿ ಶಮೀಮ್ ಬಾನು, ಐ.ಎ.ಎಸ್‌ರವರ ರಜಾ ಅವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ), ಬೆಂಗಳೂರು, ಇವರನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ, ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀಮತಿ ಶಮೀಮ್ ಬಾನು, ಐ.ಎ.ಎಸ್, ಇವರು ರಜೆಯ ಮೇಲೆ ಹೋಗಿರದಿದ್ದರೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ, ಬೆಂಗಳೂರು, ಈ ಹುದ್ದೆಯಲ್ಲಿಯೇ ಸ್ಥಾನಪನ್ನರಾಗುತ್ತಿದ್ದರೆಂದು ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಶ್ರೀನಿವಾಸಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–1).

**ಪಿ.ಆರ್. 1664**

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 237 SME 2011, Bangalore, Dated: 19th November, 2011**

Dr. R.G. Nadadur, IAS (KN-80) is permitted to retire from service with effect from 05th January 2012 under rule 16 (2) of All India Services (DCRB) Rules, 1958.

By Order and in the Name of the Governor of Karnataka,
**N. SRINIVASAMURTHY,**
Under Secretary to Government,
DP & AR(Services-I).

**P.R : 1665**